ಎಸ್.ಎಂ. ನಾಗಭೂಷಣ*

# ಉಜ್ಜಿನಿಯಲ್ಲಿ ಕೆಳದಿ ರಾಣಿ ವೀರಮ್ಮಾಜಿ ಸಮಾಧಿ ಶೋಧನೆ

ಕೆಳದಿ ಇಮ್ಮಡಿ ಬಸಪ್ಪನಾಯಕನ ರಾಣಿಯಾದ ವೀರಮ್ಮಾಜಿ ತನ್ನ ಗಂಡನ ಸಾವಿನ ನಂತರ ಹಾಗೂ ಮೊದಲ ದತ್ತು ಪುತ್ರ ಚೆನ್ನಬಸಪ್ಪನಾಯಕನ ಸಾವಿನ ನಂತರ ಕ್ರಿ.ಶ. ೧೭೫೮ ರಿಂದ ೧೭೬೩ರವರೆಗೆ ಹೈದರಾಲಿ ಹಾಗು ಚಿತ್ರದುರ್ಗದ ಪಾಳೆಗಾರರೊಡನೆ ಹೋರಾಡುತ್ತಾ ಆಡಳಿತ ಮಾಡಿದಳು. ಕ್ರಿ.ಶ. ೧೭೫೮ರಲ್ಲಿ ಮೊದಲ ದತ್ತುಪುತ್ರ ಚೆನ್ನಬಸಪ್ಪನಾಯಕನ ಸಾವಿನ ನಂತರ ವೀರಮ್ಮಾಜಿ ತನ್ನ ಸೋದರ ಮಾವನಾದ ಬಂಕಾಪುರದ ಪಟ್ಟಣಶೆಟ್ಟಿ ಚೆನ್ನವೀರಪ್ಪನ ಮಗನನ್ನು ದತ್ತು ತೆಗೆದು ಕೊಂಡು ಆತನಿಗೆ ಸೋಮಶೇಖರ ನಾಯಕನೆಂದು ನಾಮಕರಣ ಮಾಡಿ ಪಟ್ಟ ಕಟ್ಟಿದಳು. ಈ ಬಾಲಕನನ್ನು ಮುಂದಿಟ್ಟುಕೊಂಡು ಪ್ರಜೆಗಳ ನಿಂದನೆ ಯಲ್ಲಿ ಕೆಳದಿ ರಾಜ್ಯದ ಆಡಳಿತವನ್ನೆಲ್ಲಾ ತಾನೆ ನಿರ್ವಹಿಸ ತೊಡಗಿದಳು. ಈ ವೇಳೆಗೆ ದಂಡೆತ್ತಿಬಂದ ಹೈದರಾಲಿ ಕೆಳದಿ ರಾಜಧಾನಿ ಬಿಂದನೂರನ್ನು ಅತ್ಯಂತ ಪ್ರಯಾಸ ದಿಂದ ವಶಪಡಿಸಿಕೊಂಡು ರಾಣಿ ವೀರಮ್ಮಾಜಿ ಹಾಗೂ ಆಕೆಯ ದತ್ತುಪುತ್ರನಾದ ಬಾಲಕ ಮೂರನೇ ಸೋಮಶೇಖರ ನಾಯಕನನ್ನು ಸೆರೆ ಹಿಡಿದು ಮಧುಗಿರಿ ಕೋಟೆಯಲ್ಲಿ ಬಲವಾದ ಪಹರೆಯೊಡನೆ ಸೆರೆಯಲ್ಲಿರಿಸಿದ. ಕೆಲದಿನಗಳಲ್ಲಿ ಸೆರೆಯಲ್ಲಿದ್ದ ವೀರಮ್ಮಾಜಿ ಅಸ್ವಸ್ಥ ಳಾಗಿದ್ದಳು. ಕ್ರಿ.ಶ. ೧೭೬೪ರಲ್ಲಿ ಕೆಳದಿ ವೀರಮ್ಮಾಜಿಯ ಸಹಾಯಕ್ಕಾಗಿ ತಡವಾಗಿ ಬಂದ ಮರಾಠ ಮಾಧವ ರಾಯನು ಸೈನ್ಯದೊಡನೆ ಮಧುಗಿರಿಗೆ ಮುತ್ತಿಗೆ ಹಾಕಿ ರಾಣಿ ವೀರಮ್ಮಾಜಿ ಹಾಗೂ ೩ನೇ ಸೋಮಶೇಖರ ನಾಯಕನನ್ನು ಆವರ ಪರಿವಾರವನ್ನು ಸೆರೆಯಿಂದ ಬಿಡಿಸಿ ಕೊಂಡು ಪೂನಾಕ್ಕೆ ಕರೆದೊಯ್ಯುವಾಗ ದಾರಿಯಲ್ಲಿ ಅಸ್ವಸ್ಥಳಾದ ರಾಣಿ ವೀರಮ್ಮಾಜಿ ತೀರಿಕೊಂಡಳೆಂದೂ, ಮೂರನೇ ಸೋಮಶೇಖರನಾಯಕನನ್ನು ತಮ್ಮ ಆಶ್ರಯ ದಲ್ಲಿ ನರಗುಂದದಲ್ಲಿ ಕೆಲ ವರ್ಷವಿರಿಸಿಕೊಂಡುದಾಗಿ ಉಲ್ಲೇಖಗಳಿವೆ. ಹೀಗೆ ಪುಣೆಗೆ ಹೋಗುವಾಗ ವೀರಮ್ಮಾಜಿ ಬಳ್ಳಾರಿ ಜಿಲ್ಲೆಯ ಉಜ್ಜನಿಯಲ್ಲಿ ತೀರಿ ಕೊಂಡಳೆಂದು 'ಶಿವತತ್ವ ರತ್ನಾಕರ ಗ್ರಂಥದಿಂದ ತಿಳಿದು ಬರುತ್ತದೆ. ಉಜನಿಯಲ್ಲಿ ವೀರಮ್ಮಾಜಿ ಸಮಾಧಿ ಸ್ಥಳ, ಸಮಾಧಿ, ಶಿಲ್ಪಿ ಹಾಗೂ ಅಸ್ಪಷ್ಟ ಶಿಲಾ ಶಾಸನದ ಮೂಲಕ ಶೋಧಿಸಲಾಗಿದೆ. "ಉಜ್ಜನಿ" ಬಳ್ಳಾರಿ ಜಿಲ್ಲೆ ಕೂಡ್ಲಿಗಿ ತಾಲೂಕಿನಲ್ಲಿದ್ದು ತಾಲೂಕುಸ್ಥಳದಿಂದ ದಕ್ಷಿಣಕ್ಕೆ ಸುಮಾರು, ೨೨ ಕಿ.ಮೀ. ದೂರದಲ್ಲಿದೆ.

ಕೆಳದಿಯ ರಾಣಿಯಾಗಿದ್ದ ಚನ್ನಮ್ಮಾಜಿಯ ಕಾಲದಲ್ಲಿ, ಆಕೆ ಮರಾಠರಿಗೆ ನೀಡಿದ ಸಹಾಯದಿಂದ ಮರಾಠರ ಸ್ನೇಹಕ್ಕೆ ಪಾತ್ರಳಾಗಿದ್ದಳು. ಅಂದಿನಿಂದ ಪ್ರಾರಂಭವಾದ ಮರಾಠ-ಕೆಳದಿ ಸಂಬಂಧಗಳು ವೀರಮ್ಮಾಜಿಯನ್ನು ಸೆರೆಯಿಂದ ಬಿಡಿಸುವವರೆಗೆ ಮುಂದುವರಿಯುತ್ತದೆ.

ವೀರಮ್ಮಾಜಿಯೊಂದಿಗೆ ಕೆಳದಿ ಸಾಮ್ರಾಜ್ಯ ಅಂತ್ಯ ವಾಯಿತು. ಆದರೆ, ವೀರಮ್ಮಾಜಿ ಅಂತ್ಯ ಇನ್ನು ನಿಗೂಢವಾಗಿವೆ. ಡಾ|| ಕೆ.ಎನ್. ಚಿಟ್ನಿಸರು ಸಂಶೋಧನೆ ಮಾಡಿ ಮರಾಠರು ವೀರಮ್ಮಾಜಿಯನ್ನು ಆಕೆಯ ದತ್ತು

* ಸಂಶೋಧನ ಸಹಾಯಕ, ಇತಿಹಾಸ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ.

ಪುತ್ರ ಮೂರನೇ ಸೋಮಶೇಖರ ನಾಯಕನ್ನು ರಕ್ಷಿಸಿ ಪುಣೆಗೆ ಕರೆದೊಯ್ಯುವಾಗ ರಾಣಿ ವೀರಮ್ಮಾಜಿ ದಾರಿಯಲ್ಲಿ ಮರಣ ಹೊಂದಿರುವುದಾಗಿ, ದತ್ತುಪುತ್ರ ಮೂರನೆ ಸೋಮಶೇಖರನಿಗೆ ನರಗುಂದದಲ್ಲಿ ಆಶ್ರಯಕೊಟ್ಟಿದ್ದಾಗಿ ಉಲ್ಲೇಖಿಸಿದಾರೆ. ಡಾ|| ಸಾ.ಶಿ. ಮರಳಯ್ಯನವರು ತಮ್ಮ ಪಿಎಚ್.ಡಿ ಪ್ರಬಂಧದಲ್ಲಿ ಮಹಾ ಶಿವಭಕ್ತೆಯಾದ ವೀರಮ್ಮಾಜಿ ಸೋಲಿನ ಅವಮಾನವನ್ನು ಸಹಿಸಲಾರದೆ ತನ್ನ ಇಷ್ಟಲಿಂಗವನ್ನು ನುಂಗಿ ಅಸುನೀಗಿದಳೆಂದು ಉಲ್ಲೇಖಿಸಿದ್ದಾರೆ ಇದು ಸತ್ಯಕ್ಕೆ ದೂರವಾದ ವಿಷಯ. ಈ ಎಲ್ಲ ಸಂಶೋಧನೆಗಳನಂತರ ಈಗ ಶೋಧನೆಯಾಗಿರುವ ಮಾಹಿತಿಗಳಿಂದ ಇವರು ಉಜ್ಜನಿ ಮಾರ್ಗವಾಗಿ ಪುಣೆಗೆ ಹೊರಟಿರಬಹುದು, ವೀರಶೈವರಾದ ಕೆಳದಿ ಅರಸರು ಅನೇಕ ಮಠಮಾನ್ಯಗಳಿಗೆ ದತ್ತಿದಾನಗಳನ್ನು ಕೊಟ್ಟು ಭಕ್ತಿಯಿಂದ ನಡೆದುಕೊಂಡಿದ್ದಾರೆ. ಉಜ್ಜನಿ ಮಾರ್ಗವಾಗಿ ಪುಣೆಗೆ ಹೊರಟ ವೀರಮ್ಮಾಜಿ ದಾರಿಯಲ್ಲಿ ಉಜ್ಜನಿ ಮಠದಲ್ಲಿ ವಿಶ್ರಾಂತಿಗಾಗಿ ಕೆಲದಿನ ತಂಗಿರಬಹುದು. ಮೊದಲೇ ಅಸ್ವಸ್ಥಳಾಗಿದ್ದರಿಂದಲೂ, ರಾಜ್ಯ ಕಳೆದುಕೊಂಡ ನೋವಿನಿಂದಲೂ, ದೈಹಿಕ, ಮಾನಸಿಕ ಅಸ್ವಸ್ಥತೆಯಿಂದ ಮರಣ ಹೊಂದಿರಬೇಕು. ಹೀಗಾಗಿ ಇವಳ ಸಮಾಧಿ ಉಜ್ಜನಿಯ ಮರುಳಸಿದ್ಧೇಶ್ವರ ದೇವಸ್ಥಾನದ ಎದುರಿನಲ್ಲಿ ಮಾಡಲಾಯಿತು. ಈಗ ಈ ಸಮಾಧಿ ಸುತ್ತಲು ಮನೆಗಳಾಗಿ ಮುಚ್ಚಿ ಹೋಗಿದ್ದು ಇತ್ತೀಚಿಗೆ ಶೋಧನೆ ನಡೆಸಿದಾಗ ಉಜ್ಜನಿ ಶಾಂತನಳ್ಳಿ ಕೊಡದಪ್ಪನವರ ಮನೆಯ ಮುಂಭಾಗದಲ್ಲಿ ಈ ಸಮಾಧಿ ಬೆಳಕಿಗೆ ಬಂದಿದೆ.

ಸಮಾಧಿ ಶಿಲ್ಪ ನೆಲದಿಂದ ಐದು ಅಡಿ ಎತ್ತರದ ಕಂಬದ ಮೇಲೆ ಪೂರ್ವಾಭಿಮುಖವಾಗಿರುವ ಮಲಗಿದ ನಂದಿ ಕೆಳಭಾಗದ ಬಲ ಬದಿಗೆ ಕೈಮುಗಿದುನಿಂತ ಎರಡು ಉಬ್ಬು ಶಿಲ್ಪ ಮೂರ್ತಿಗಳು ಇವೆ. ರಾಣಿ ವೀರಮ್ಮಾಜಿ ಹಾಗೂ ಆಕೆಯ ಗಂಡನಿರಬಹುದು. ಮೇಲೆ ಸೂರ್ಯ ಚಂದ್ರ ಈಶ್ವರನ ಉಬ್ಬು ಶಿಲ್ಪಗಳಿವೆ. ಕೆಳಭಾಗದಲ್ಲಿ ಶಾಸನವಿದೆ.

ಈ ಶಾಸನವು ಐದು ಸಾಲುಗಳನ್ನು ಹೊಂದಿದ್ದು ಓದಲು ಕಷ್ಟವಾಗಿದೆ. ಕಲ್ಲಿನ ೧೦''×೭'' ಭಾಗದಲ್ಲಿ ಶಾಸನ ಪಾಠವಿದೆ.

**ಶಾಸನಪಾಠ**

೧. .........ದವರ ಮಜರಿಸಿ.........
೨. .........ಪನ ಮಗ ಬಸ.........
೩. .........ಯಕ ವದನು ಬಸವಪ್ಪವನ ಹಾ
೪. .........ಳು ಅಜವನರಸ ಮಾಡಿದ....
೫. .........ಕಂಡರಸಿದ ಶ್ರೀ....

[ಈ ಶೋಧನೆಗೆ ಮಾರ್ಗದರ್ಶನ ಮಾಡಿ ಪ್ರೋತ್ಸಾಹಿಸಿದ ಕೆಳದಿ ಗುಂಡಾ ಜೋಯಿಸರಿಗೆ ಕೃತಜ್ಞತೆಗಳು]